ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ಕೆ.ಎ.ಐ.ಡಿ.ಬಿ. ವತಿಯಿಂದ ರಾಜ್ಯದಲ್ಲಿ ಕೈಗಾರಿಕಾ ಅಭಿವೃದ್ಧಿಗಾಗಿ ವಶಪಡಿಸಿಕೊಳ್ಳಲಾದ ಜಮೀನಿನ ಬಗ್ಗೆ

ಶ್ರೀ ಕೆ. ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) :-

143 (78) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ 10 ವರ್ಷಗಳಲ್ಲಿ ಕೆ.ಎ.ಐ.ಡಿ.ಬಿ. ವತಿಯಿಂದ ರಾಜ್ಯದಲ್ಲಿ ಕೈಗಾರಿಕಾ ಅಭಿವೃದ್ಧಿಗಾಗಿ ವಶಪಡಿಸಿಕೊಳ್ಳಲಾದ ಜಮೀನಿನ ವಿಸ್ತೀರ್ಣವೆಷ್ಟು ;

(ಆ) ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು ಕೈಗಾರಿಕೋದ್ಯಮಿಗಳಿಗೆ ನೀಡಲಾಗಿರುವ ರಿಯಾಯಿತಿಗಳಾವುವು ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಈಗಾಗಲೇ ವಿತರಿಸಲಾಗಿರುವ ಕೈಗಾರಿಕಾ ಶೆಡ್ಡುಗಳ ಸಂಖ್ಯೆ ಎಷ್ಟು ; ಈ ಶೆಡ್ಡುಗಳನ್ನು ಯಾವ ಮಾನದಂಡದ ಮೇಲೆ ವಿತರಿಸಲಾಗಿರುತ್ತದೆ ;

(ಈ) ಉದ್ಯಮಗಳನ್ನು ನಡೆಸಲು ನೀಡಲಾಗಿರುವ ಜಮೀನುಗಳಲ್ಲಿ ಈವರೆವಿಗೂ ಉದ್ಯಮಗಳನ್ನು ಸ್ಥಾಪಿಸದಿರುವ ಉದ್ಯಮಿಗಳ ಸಂಖ್ಯೆ ಎಷ್ಟು ; ಇವರುಗಳ ಮೇಲೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು;

(ಉ) ರಾಜ್ಯದಲ್ಲಿ ಉದ್ಯಮಗಳನ್ನು ಸ್ಥಾಪಿಸದೆ ಅನ್ಯ ಉದ್ದೇಶಕ್ಕಾಗಿ ಜಮೀನನ್ನು ಬಳಸಿಕೊಂಡಿರುವ ಪ್ರಕರಣಗಳೆಷ್ಟು ; ಹಾಗಿದ್ದಲ್ಲಿ, ಅಂತಹವರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು ?